# ಎನ್.ಸಿ.ಎಫ್ ನ ಬೆನ್ನೆಲುಬು

## *ಅನುರಾಗ್ ಬೆಹರ್*

‘ಕಲಿಕಾ ಮಾನದಂಡಗಳು’, ಶಿಕ್ಷಣ ಸಚಿವಾಲಯವು 2023ರ ಆಗಸ್ಟ್ 23ರಂದು ಬಿಡುಗಡೆಗೊಳಿಸಿದ ಶಾಲಾ ಶಿಕ್ಷಣದ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟಿನ (ಎನ್.ಸಿ.ಎಫ್) ಬೆನ್ನೆಲುಬು ಎನಿಸಿವೆ. ಒಟ್ಟಾರೆಯಾಗಿ ಎಲ್ಲ ಅಂಶಗಳನ್ನು ಜೊತೆಯಾಗಿ ಹೆಣೆದುಕೊಂಡು ಎನ್.ಸಿ.ಎಫ್ ನ ಸುತ್ತಲೂ ರೂಪಿಸಲಾಗಿರುವುದರಿಂದ ಇದನ್ನು ‘ಬೆನ್ನೆಲುಬು’ ಎಂದು ಕರೆಯಲಾಗಿದೆ. ಪ್ರಮುಖವಾಗಿ ಇಲ್ಲಿ ಕಲಿಕಾ ಮಾನದಂಡಗಳು, ಈ ಎಲ್ಲ ಅಂಶಗಳಲ್ಲಿ ಗುರಿಯನ್ನು ಹೊಂದಿಸುತ್ತವೆ ಹಾಗೂ ಸ್ಥಿರತೆ ಮತ್ತು ಸುಸಂಗತತೆಯನ್ನು ಸಾಧಿಸಲು ಪೂರಕವಾಗಿ ಒದಗಿ ಬರುತ್ತವೆ. ಎನ್.ಸಿ.ಎಫ್ ಕುರಿತ ಸರಣಿಯ ಎರಡನೇ ಅಂಕಣದಲ್ಲಿ ಈ ಕುರಿತು ನಾವು ಸವಿಸ್ತಾರವಾಗಿ ಚರ್ಚಿಸೋಣ.  ಸರಣಿಯ ಇತರ ಅಂಕಣಗಳೊಂದಿಗೆ ಈ ಅಂಕಣವೂ ಸಹ, ಎನ್.ಸಿ.ಎಫ್‌ನ ಮೂಲ ಆಶಯದೊಂದಿಗೆ ನಿಷ್ಠೆ ಇರಿಸಿಕೊಳ್ಳುವುಕ್ಕಾಗಿ ಮುಕ್ತವಾಗಿ ಅದರ ತಾತ್ಪರ್ಯವನ್ನು ಕಟ್ಟಿ ಕೊಡುತ್ತದೆ.

ಆರಂಭಕ್ಕೆ ಮುನ್ನವೇ ಒಮ್ಮೆ ಸಿಂಹಾವಲೋಕನ ಮಾಡೋಣ: ಪಠ್ಯಕ್ರಮವು ಪಠ್ಯವಿಷಯ, ವಿಷಯವಸ್ತು, ಶಿಕ್ಷಣಶಾಸ್ತ್ರೀಯ ಅಭ್ಯಾಸಗಳು ಮತ್ತು ಮೌಲ್ಯಮಾಪನ, ಪಠ್ಯಪುಸ್ತಕಗಳು, ಬೋಧನಾ-ಕಲಿಕೆ ಸಾಮಗ್ರಿಗಳು, ಶಾಲಾ ಮತ್ತು ತರಗತಿ ಅಭ್ಯಾಸಗಳು, ಪರಿಸರ ಮತ್ತು ಶಾಲೆಗಳ ಸಂಸ್ಕೃತಿಯನ್ನು ಒಳಗೊಂಡಿದೆ. ಈ ಅಂಶಗಳನ್ನು ವಿನ್ಯಾಸಗೊಳಿಸಿ ಅಭಿವೃದ್ಧಿಪಡಿಸಬೇಕಾದರೆ, ಅನೇಕ ವಿಚಾರಗಳನ್ನು ಪರಿಗಣಿಸಬೇಕಾಗುತ್ತದೆ. ಉದಾಹರಣೆಗೆ, ಶೈಕ್ಷಣಿಕ ಮನೋವಿಜ್ಞಾನ ಮತ್ತು ನರವಿಜ್ಞಾನ; ಗಣಿತ, ಸಮಾಜ ವಿಜ್ಞಾನ, ಕಲೆ ಇತ್ಯಾದಿ ವಿಷಯಗಳ ಜ್ಞಾನ; ಶಿಕ್ಷಣಶಾಸ್ತ್ರೀಯ ಅಭ್ಯಾಸಗಳಲ್ಲಿ ಅನುಭವ ಮತ್ತು ಸಂಶೋಧನೆ; ಹಾಗೂ ನಮ್ಮ ಶಾಲೆಗಳ ಸಾಮರ್ಥ್ಯ ಮತ್ತು ಸಂಪನ್ಮೂಲಗಳು.

ಈ ವಿವಿಧ ಅಂಶಗಳ ನಡುವೆ ಸುಸಂಬದ್ಧತೆ ಕಾಪಾಡಿಕೊಳ್ಳಬೇಕಾದರೆ, ನಮ್ಮ ಶಿಕ್ಷಣ ವ್ಯವಸ್ಥೆಗಾಗಿ ನಿಗದಿಪಡಿಸಿರುವ ಗುರಿಯನ್ನು ಸಾಧಿಸುವುದಕ್ಕಾಗಿ ಸಾಮರಸ್ಯದೊಂದಿಗೆ ಕೆಲಸ ಮಾಡುವುದು ಶಿಕ್ಷಣ ಕ್ಷೇತ್ರದಲ್ಲಿ ಎದುರಾಗುವ ಅತ್ಯಂತ ಮೂಲಭೂತ ಸವಾಲಾಗಿದೆ. ಮುಖ್ಯವಾಗಿ, ಜಾರಿಗೊಳಿಸುವ ಮೊದಲು ವಿನ್ಯಾಸ ಮತ್ತು ಅಭಿವೃದ್ಧಿಯ ಸಂದರ್ಭದಲ್ಲಿಯೇ ಈ ಸವಾಲು ಎದುರಾಗುತ್ತದೆ. ಪ್ರಾಯೋಗಿಕ ಪರಿಗಣನೆಗಳು ಸೇರಿದಂತೆ ಉತ್ತಮ ವಿನ್ಯಾಸ ಮತ್ತು ಅಭಿವೃದ್ಧಿಯು ಅತ್ಯಗತ್ಯವೆನಿಸಿದರೂ, ನೈಜ ಪ್ರಪಂಚದಲ್ಲಿ ಪರಿಣಾಮಕಾರಿ ಆಚರಣೆ ಮತ್ತು ಜಾರಿಗೆ ಇದುವೇ ಪ್ರಮುಖವಾದ ಅಗತ್ಯತೆಯಲ್ಲ. ವಿನ್ಯಾಸ ಮತ್ತು ಅಭಿವೃದ್ಧಿಯ ವಿಚಾರವನ್ನು ಹೊರತುಪಡಿಸಿ ಅನುಷ್ಠಾನಕ್ಕೆ ಸಂಬಂಧಿಸಿದ ಬೇರಾವುದೇ ವಿಚಾರಗಳ ಕುರಿತು ಈ ಅಂಕಣವು ಬೆಳಕು ಹರಿಸುವುದಿಲ್ಲ.

‘ಕಲಿಕಾ ಮಾನದಂಡಗಳು’ ಎಂದರೇನು ಹಾಗೂ ಅವು ಹೇಗೆ ಗುರಿಯ ಹೊಂದಾಣಿಕೆಯನ್ನು ಸಾಧಿಸುತ್ತವೆ? ಮೂಲದಲ್ಲಿ ಇವು ಗುರಿಗಳ ಸಮೂಹ. ಇವು ಅತ್ಯಂತ ಅಮೂರ್ತ ಮತ್ತು ದೀರ್ಘಕಾಲೀನ ಗುರಿ  - ಉದಾಹರಣೆಗೆ, ‘ಶಿಕ್ಷಣದಿಂದ ಸಮಾಜವು ಏನನ್ನು ನಿರೀಕ್ಷಿಸುತ್ತದೆ’

ಎಂಬುದರಿಂದ ಹಿಡಿದು ಅತ್ಯಂತ ನಿರ್ದಿಷ್ಟ, ಅಲ್ಪಕಾಲೀನ ಮತ್ತು ಪ್ರಯೋಜನಕಾರಿ ಗುರಿಗಳ ತನಕ ಒಳಗೊಂಡಿವೆ. ಅಂತಿಮವಾಗಿ ಶಾಲೆಯಲ್ಲಿ ದೈನಂದಿನ ಬದುಕಿಗೆ ಪ್ರಸ್ತುತವೆನಿಸುವ ಗುರಿಗಳನ್ನು ನಿಗದಿಪಡಿಸುವ ವೇಳೆಯೂ ಸಹ ಈ ಕಲಿಕಾ ಮಾನದಂಡಗಳು ಹೆಚ್ಚು ವಿವರವಾದ ಮತ್ತು ನಿರ್ದಿಷ್ಟ ಅಂಶವೆನಿಸುತ್ತವೆ. ವಿಶಾಲ ಹಂತದಿಂದ ನಿರ್ದಿಷ್ಟತೆಗೆ, ದೀರ್ಘಕಾಲೀನದಿಂದ ತಕ್ಷಣಕ್ಕೆ - ಹೀಗೆ ತೀಕ್ಷ್ಣ ಪ್ರಕ್ರಿಯೆಯನ್ನು ಹೊಂದಿದ್ದರೂ, ಮುಂದಿನ ಹಂತದ ಗುರಿಗಳನ್ನು ಉನ್ನತ ಮಟ್ಟದ ಗುರಿಗಳಿಂದ ಸಡಿಲವಾಗದಂತೆ ಎರವಲು ಪಡೆಯಲಾಗಿದೆ, ಹಾಗೂ ಇವು ಆಂತರಿಕವಾಗಿ ಸುಸಂಬದ್ಧತೆಯನ್ನು ಹೊಂದಿವೆ ಮತ್ತು ಉನ್ನತ ಮಟ್ಟದ ಗುರಿಯ ಎಲ್ಲ ಅಂಶಗಳು ಮತ್ತು ಸೂಕ್ಷ್ಮತೆಗಳ ಮೇಲೆ ಬೆಳಕು ಹರಿಸಲು ಅನುವಾಗುವಂತೆ ಖಚಿತಪಡಿಸುತ್ತವೆ. ಎನ್.ಸಿ.ಎಫ್ ನ ಎಲ್ಲ ಅಂಶಗಳು, ಈ ಗುರಿಗಳನ್ನು ಸಾಧಿಸುವ ಹಾಗೂ ಹೊಂದಾಣಿಕೆ ಮತ್ತು ಸುಸಂಬದ್ಧತೆಗೆ ಅನುವು ಮಾಡಿಕೊಡುವುದರ ಮೇಲೆ ಬೆಳಕು ಹರಿಸುತ್ತವೆ.

ಉನ್ನತ ಮಟ್ಟದಲ್ಲಿ, ಭಾರತದ ಸಂವಿಧಾನದಲ್ಲಿ ಕಲ್ಪಿಸಿಕೊಂಡಂತೆ, ನಮ್ಮ ಸಮಾಜದ ದೃಷ್ಟಿಕೋನದಿಂದ ಪಡೆಯಲಾದ, ಶಾಲಾ ಶಿಕ್ಷಣದ ಗುರಿಗಳನ್ನು ಈ ಕಲಿಕಾ ಮಾನದಂಡಗಳು ಸ್ಪಷ್ಟಪಡಿಸುತ್ತವೆ. ಈ ಗುರಿಗಳು, ತಾರ್ಕಿಕವಾಗಿ ಮತ್ತು ಸ್ವತಂತ್ರವಾಗಿ ಯೋಚಿಸುವುದು; ಆರೋಗ್ಯ ಮತ್ತು ಯೋಗಕ್ಷೇಮ; ಪ್ರಜಾತಾಂತ್ರಿಕತೆ ಮತ್ತು ಸಮುದಾಯದ ಪಾಲ್ಗೊಳ್ಳುವಿಕೆ; ಆರ್ಥಿಕ ಪಾಲ್ಗೊಳ್ಳುವಿಕೆ; ಮತ್ತು ಸಾಂಸ್ಕೃತಿಕ ಪಾಲ್ಗೊಳ್ಳುವಿಕೆ ಇವುಗಳನ್ನು ಅಭಿವೃದ್ಧಿಪಡಿಸುವುದಾಗಿದೆ. ಇವು ಸಾಧ್ಯವಾಗಬೇಕಾದರೆ ಈ ಕೆಳಗಿನ ಮೌಲ್ಯಗಳು, ಮನೋಭಾವಗಳು, ಸಾಮರ್ಥ್ಯಗಳು ಮತ್ತು ಜ್ಞಾನದ ಅಗತ್ಯವಿದೆ: ನೈತಿಕತೆ ಮತ್ತು ಸದಾಚಾರ, ಪ್ರಜಾತಾಂತ್ರಿಕ ಮತ್ತು ಜ್ಞಾನಕ್ಕೆ ಸಂಬಂಧಿಸಿದ ಮೌಲ್ಯಗಳು ಸೇರಿದಂತೆ ಸೂಕ್ತ ಮೌಲ್ಯಗಳನ್ನು ಅಭಿವೃದ್ಧಿಪಡಿಸುವುದು; ಸಕಾರಾತ್ಮಕ ಮನೋಭಾವವನ್ನು ಅಳವಡಿಸಿಕೊಳ್ಳುವುದು - ಕುತೂಹಲ ಮತ್ತು ಅಚ್ಚರಿ, ಸಕಾರಾತ್ಮಕ ಕಾರ್ಯನೀತಿ, ಭಾರತದ ಬಗ್ಗೆ ಹೆಮ್ಮೆ ಮತ್ತು ಅದರ ಬೇರಿನೊಂದಿಗೆ ಗುರುತಿಸಿಕೊಳ್ಳುವುದು; ಶೋಧನೆ, ಪರಿಣಾಮಕಾರಿ ಸಂವಹನ, ಸಮಸ್ಯೆ ಪರಿಹಾರ, ತಾರ್ಕಿಕತೆ, ಸೃಜನಶೀಲತೆ, ಕಲಾಮೀಮಾಂಸೆಯ ಅಭಿವ್ಯಕ್ತಿ, ಆರೋಗ್ಯವನ್ನು ಕಾಪಾಡುವುದು, ಉತ್ಪಾದಕ ಕೆಲಸ, ಮತ್ತು ಸಾಮಾಜಿಕವಾಗಿ ಪರಿಣಾಮಕಾರಿಯಾಗಿ ತೊಡಗಿಸಿಕೊಳ್ಳುವುದು ಇತ್ಯಾದಿಗಳಿಗಾಗಿ ಸಾಮರ್ಥ್ಯಗಳನ್ನು ಅಭಿವೃದ್ಧಿಪಡಿಸುವುದು; ಅಲ್ಲದೆ ಅಂತರ್-ಶಿಸ್ತೀಯ ಕ್ಷೇತ್ರಗಳು ಸೇರಿದಂತೆ ಭಾಷೆ, ಗಣಿತ, ನೈಸರ್ಗಿಕ ವಿಜ್ಞಾನ, ಸಮಾಜ ವಿಜ್ಞಾನ ಮತ್ತು ಮಾನವಿಕಗಳು, ಕಲೆ, ದೈಹಿಕ ಶಿಕ್ಷಣ, ಮತ್ತು ವೃತ್ತಿ ಆಧರಿತ ಶಿಕ್ಷಣ ಮುಂತಾದ 'ಪಠ್ಯಕ್ರಮ ಕ್ಷೇತ್ರಗಳಲ್ಲಿ' ವಿಶಾಲ ಮತ್ತು ಆಳವಾದ ಜ್ಞಾನವನ್ನು ಗಳಿಸುವುದು.

ಈ ಮೌಲ್ಯಗಳು ಮತ್ತು ಮನೋಭಾವಗಳು, ಸಾಮರ್ಥ್ಯಗಳು ಮತ್ತು ಜ್ಞಾನವನ್ನು ಸಾಧಿಸುವುದಕ್ಕಾಗಿ ನಾಲ್ಕು ಹಂತಗಳಲ್ಲಿ ನಿರ್ದಿಷ್ಟವಾಗಿ ವೃದ್ಧಿಯಾಗುವ ಕಲಿಕಾ ಮಾನದಂಡಗಳನ್ನು ಎರವಲು ಪಡೆಯಲಾಗಿದೆ. ಪಠ್ಯಕ್ರಮದ ಗುರಿಗಳು - ಪಠ್ಯಕ್ರಮದ ಪ್ರತಿ ಕ್ಷೇತ್ರದೊಳಗೆ ಸ್ಪಷ್ಟಪಡಿಸುವುದು, ಸೂಕ್ತ ಶಾಲಾ ಸಂಸ್ಕೃತಿ ಮತ್ತು ಪ್ರಕ್ರಿಯೆಗಳೊಂದಿಗೆ ಸಕ್ರಿಯಗೊಳಿಸುವುದು ಮತ್ತು ಇವುಗಳನ್ನು ಶಾಲಾ ಶಿಕ್ಷಣ ಮುಗಿಯುವ ಮೊದಲು ಸಾಧಿಸುವುದು. ಈ ಗುರಿಗಳು, ಶಾಲಾ ಶಿಕ್ಷಣದ ನಾಲ್ಕು ಹಂತಗಳಲ್ಲಿ ಪ್ರತಿ ಹಂತದಲ್ಲಿ ಸಾಧಿಸಬೇಕಾದ ಪಠ್ಯಕ್ರಮದ ಉದ್ದೇಶಗಳಿಗೆ ಕಾರಣವೆನಿಸುತ್ತವೆ. ಇವು ನಿರ್ದಿಷ್ಟ

ಹೇಳಿಕೆಗಳಾಗಿದ್ದು ಪಠ್ಯಕ್ರಮದ ಅಭಿವೃದ್ಧಿ ಮತ್ತು ಅನುಷ್ಠಾನಕ್ಕೆ ನಿರ್ದೇಶನವನ್ನು ನೀಡುತ್ತವೆ. ಇವು ಸಾಮರ್ಥ್ಯಗಳತ್ತ ಕೆಳಮುಖವಾಗಿ ಹರಿಯುತ್ತವೆ - ಇವು ಗಮನಿಸಬಹುದಾದ ಮತ್ತು ವ್ಯವಸ್ಥಿತವಾಗಿ ಮೌಲ್ಯಮಾಪನಕ್ಕೆ ಒಳಪಡಿಸಬಹುದಾದ ನಿರ್ದಿಷ್ಟ ಕಲಿಕಾ ಸಾಧನೆಗಳಾಗಿವೆ. ಇವುಗಳನ್ನು ಮತ್ತೆ ಪ್ರತಿ ತರಗತಿಗಾಗಿ ನಿರ್ದಿಷ್ಟ ಕಲಿಕಾ ಫಲಗಳಾಗಿ ವಿಭಜಿಸಲಾಗುತ್ತದೆ - ಇವು ಕಲಿಕೆಯ ಬಿಡಿಬಿಡಿಯಾದ ಮೈಲುಗಲ್ಲುಗಳಾಗಿದ್ದು, ಸಾಮಾನ್ಯವಾಗಿ ಅನುಕ್ರಮವಾಗಿ ಸಾಗಿ ಸಾಮರ್ಥ್ಯದ ಗಳಿಕೆಗೆ ಅನುವು ಮಾಡಿಕೊಡುತ್ತವೆ, ಮತ್ತು ಶಿಕ್ಷಕರಿಗೆ ತಮ್ಮ ವಿಷಯವಸ್ತು, ಬೋಧನಾವಿಧಾನ ಮತ್ತು ಮೌಲ್ಯಮಾಪನಗಳ ಯೋಜನೆ ರೂಪಿಸಲು ಸಹಾಯ ಮಾಡುತ್ತವೆ.

ಎನ್.ಸಿ.ಎಫ್ ನಿಂದ ನೇರವಾಗಿ ಪಡೆಯಲಾದ ಒಂದು ಉದಾಹರಣೆ ಇಲ್ಲಿದೆ. ಪರಿಣಾಮಕಾರಿ ಸಂವಹನ ಕೌಶಲ್ಯಗಳನ್ನು ಅಭಿವೃದ್ಧಿಪಡಿಸುವುದು ಭಾಷಾ ಶಿಕ್ಷಣದ ಐದು ಪಠ್ಯಕ್ರಮ ಗುರಿಗಳಲ್ಲಿ ಒಂದಾಗಿದೆ: 'ವಿಮರ್ಶಾತ್ಮಕವಾಗಿ ಯೋಚಿಸಲು, ನೈಜ ಪ್ರಪಂಚದ ಸಮಸ್ಯೆಗಳನ್ನು ಗುರುತಿಸಲು, ಅವುಗಳನ್ನು ವಿಶ್ಲೇಷಿಸಲು, ತಾರ್ಕಿಕ ವಾದಗಳನ್ನು ಮಾಡಲು ಮತ್ತು ಪರಿಹಾರಗಳನ್ನು ಕಂಡುಕೊಳ್ಳಲು ವಿದ್ಯಾರ್ಥಿಗಳು ತಮ್ಮ ಭಾಷಾ ಸಾಮರ್ಥ್ಯಗಳನ್ನು ಅಭಿವೃದ್ಧಿಪಡಿಸಿಕೊಳ್ಳುವುದು. ಬೇರೆ ಬೇರೆ ಸಂದರ್ಭಗಳಲ್ಲಿ ಚೆನ್ನಾಗಿ ಯೋಚಿಸುವುದಕ್ಕಾಗಿ ಮತ್ತು ಸಂವಹನ ನಡೆಸುವುದಕ್ಕಾಗಿ ಭಾಷೆಯ ಬಳಕೆಯು, ಪರಿಣಾಮಕಾರಿ ಪ್ರಜಾತಾಂತ್ರಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಪಾಲ್ಗೊಳ್ಳುವಿಕೆಗಾಗಿ ಅತ್ಯಗತ್ಯವಾಗಿದೆ'. ಪ್ರೌಢ ಹಂತದಲ್ಲಿ ನಾಲ್ಕು ಪಠ್ಯಕ್ರಮ ಉದ್ದೇಶಗಳಲ್ಲಿನ ಒಂದು ಉದ್ದೇಶವೆಂದರೆ: 'ವಿವಿಧ ಶ್ರವಣ ಮತ್ತು ಲಿಖಿತ ಸಾಮಗ್ರಿಗಳೊಂದಿಗೆ ತೊಡಗಿಸಿಕೊಳ್ಳುವ ಮೂಲಕ ತಾರ್ಕಿಕತೆ ಮತ್ತು ಸುಸಂಬದ್ಧವಾಗಿ ವಾದ ಮಾಡುವ ಕೌಶಲ್ಯವನ್ನು ಅಭಿವೃದ್ಧಿಪಡಿಸಲು ಭಾಷೆಯನ್ನು ಬಳಸುವುದು.' ಇದು ನಂತರದಲ್ಲಿ, ಇತರ ಹದಿನಾಲ್ಕು ಸಾಮರ್ಥ್ಯಗಳಲ್ಲಿ ಒಂದು ಸಾಮರ್ಥ್ಯವಾದ - 'ಪ್ರಮೇಯವನ್ನು ಎಚ್ಚರಿಕೆಯಿಂದ ಪರ್ಯಾಲೋಚಿಸಿ ಸೂಕ್ತ ತಾರ್ಕಿಕತೆಯೊಂದಿಗೆ ವಾದ ಮಾಡುವುದು' - ಇದರ ಅಭಿವೃದ್ಧಿಗೆ ಕಾರಣವಾಗುತ್ತದೆ. ಅಂತಿಮವಾಗಿ ಇದು 9ನೇ ತರಗತಿಯ ಅನೇಕ ಕಲಿಕಾ ಫಲಗಳಲ್ಲಿ ಒಂದು ನಿರ್ದಿಷ್ಟ ಫಲಕ್ಕೆ ಕಾರಣವೆನಿಸುತ್ತದೆ: 'ಒಂದು ವಾದದ ಪ್ರಮೇಯವನ್ನು ಅದರ ಸ್ಪಷ್ಟತೆ, ಪ್ರಸ್ತುತತೆ ಮತ್ತು ವಿಶ್ವಾಸಾರ್ಹತೆಗಾಗಿ (ಸಾಕ್ಷ್ಯಾಧಾರದ ಮೇಲೆ) ಪರ್ಯಾಲೋಚಿಸುವುದು'.

ಹೀಗೆ ಕಲಿಕಾ ಮಾನದಂಡಗಳು ಎಲ್ಲ ಹಂತಗಳಲ್ಲಿ ಮತ್ತು ಸಮಯದ ಚೌಕಟ್ಟುಗಳಲ್ಲಿ (ಶಾಲೆಯ ಒಂದು ಅವಧಿಯಲ್ಲಿ ಕಲಿಸುವುದರಿಂದ ಹಿಡಿದು ಪಠ್ಯಪುಸ್ತಕಗಳು ಮತ್ತು ಪಠ್ಯವಿಷಯವನ್ನು ಅಭಿವೃದ್ಧಿಪಡಿಸುವ ತನಕ) ಶಿಕ್ಷಣದಲ್ಲಿನ ಚಟುವಟಿಕೆಗಳಿಗೆ ಗುರಿಗಳನ್ನು ಒದಗಿಸುತ್ತವೆ. ಹೀಗಾಗಿಯೇ ಇದು ಎನ್.ಸಿ.ಎಫ್ ನ ಬೆನ್ನೆಲುಬು ಎನಿಸಿದೆ. ಮುಂದಿನ ಅಂಕಣದಲ್ಲಿ ಇನ್ನಷ್ಟು ವಿಷಯಗಳನ್ನು ಚರ್ಚಿಸೋಣ.